

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಸದಸ್ಯರ ಹೆಸರು | : | ಡಾ: ತೇಜಸ್ವಿನಿ ಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 917 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಕೈಮಗ್ಗ ಮತ್ತು ಜವಳಿ, ಸಕ್ಕರೆ ಹಾಗೂ ಕಬ್ಬು ಅಭಿವೃದ್ಧಿ ಸಚಿವರು |
| ಉತ್ತರಿಸಬೇಕಾದ ದಿನಾಂಕ | : | 21-12-2021 |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕೈಮಗ್ಗ ವಲಯದ ನೇಕಾರರು ಎದುರಿಸುತ್ತಿರುವ ಸಮಸ್ಯೆಗಳೇನು; ಕೈಮಗ್ಗ ಹಾಗೂ ಯಂತ್ರಚಾಲಿತ ಮಗ್ಗಗಳ ನಡುವೆ ಆರೋಗ್ಯಕರ ಸ್ಪರ್ಧೆ ಇದೆಯೇ; ಮಾರುಕಟ್ಟೆಯಲ್ಲಿ ಯಾವ ನೇಕಾರಿಕೆಗೆ ಹೆಚ್ಚು ಬೇಡಿಕೆ ಇದೆ; ಬೇಡಿಕೆ ಹಾಗೂ ಪೂರೈಕೆ ಅನುಪಾತ ಸಮಸ್ಥಿತಿ ಯಲ್ಲಿದೆಯೇ; | ಕೈಮಗ್ಗದಿಂದ ತಯಾರಿಸಿದ ಬಟ್ಟೆಗಳಗಿಂತ ವಿದ್ಯುತ್ ಮಗ್ಗ ಹಾಗೂ ಮಿಲ್‌ಗಳಂದ ತಯಾರಾದ ಉತ್ಪನ್ನಗಳ ಬೆಲೆಯು ಮಾರುಕಟ್ಟೆಯಲ್ಲಿ ಕಡಿಮೆಯಿರುವುದು ಪ್ರಮುಖವಾಗಿ ಕೈಮಗ್ಗ ವಲಯದ ನೇಕಾರರು ಎದುರಿಸುತ್ತಿರುವ ಸಮಸ್ಯೆಗಳಲ್ಲಿ ಒಂದಾಗಿದೆ.<br>ಯಂತ್ರಚಾಲಿತ ಮಗ್ಗಗಳಲ್ಲಿ ತಯಾರಾಗುವ ಉತ್ಪನ್ನಗಳು ಕಡಿಮೆ ದರದಿಂದಾಗಿ ಹೆಚ್ಚಿನ ಬೇಡಿಕೆಯನ್ನು ಪಡೆದಿದ್ದರೂ ಸಹ ಕೈಮಗ್ಗದಲ್ಲಿ ತಯಾರಿಸುವಂತಹ ಕೆಲವು ಉತ್ಪನ್ನಗಳು ವಿಶೇಷ ಗುಣಮಟ್ಟ ಮತ್ತು ವೈಶಿಷ್ಟತೆಯನ್ನು ಹೊಂದಿರುವುದರಿಂದ ಅವುಗಳಿಗೆ ಪ್ರತ್ಯೇಕ ಬೇಡಿಕೆ ಇದೆ. ಹೀಗಾಗಿ ಕೈಮಗ್ಗ ಹಾಗೂ ಯಂತ್ರಚಾಲಿತ ಮಗ್ಗಗಳ ನಡುವೆ ಆರೋಗ್ಯಕರ ಸ್ಪರ್ಧೆ ಇದೆ.<br>ಮಾರುಕಟ್ಟೆಯಲ್ಲಿ ರೇಷ್ಮೆ ಸೀರೆ ನೇಯ್ಗೆ ಮಾಡುವ ನೇಕಾರಿಕೆಗೆ ಹೆಚ್ಚಿನ ಬೇಡಿಕೆ ಇದೆ.<br>ಕೈಮಗ್ಗಗಳ ಸಂಖ್ಯೆ ಕಡಿಮೆಯಾಗಿರುವುದರಿಂದ ಹಾಗೂ ಯಂತ್ರಚಾಲಿತ ಮಗ್ಗಗಳ ಸಂಖ್ಯೆಯು ಅಧಿಕವಾಗಿರುವುದರಿಂದ ಉತ್ಪಾದನೆ / ಪೂರೈಕೆಯಲ್ಲಿ ವ್ಯತ್ಯಾಸ ಇರುತ್ತದೆ. |
| ಆ | ಕೈಮಗ್ಗ ನೇಕಾರಿಕೆಯಲ್ಲಿ ಬೇಡಿಕೆ ಇರುವ ನೂಲು ಯಾವುದು; ರೇಷ್ಮೆಯೋ; ಹತ್ತಿಯೋ; ಪಾಲಿಸ್ಟಾರೋ; | ಕೈಮಗ್ಗ ನೇಕಾರಿಕೆಯಲ್ಲಿ ಹತ್ತಿಯ ನಂತರ ರೇಷ್ಮೆಯ ನೂಲು ಬೇಡಿಕೆಯಲ್ಲಿರುತ್ತದೆ. |
| ಇ | ಕೈಮಗ್ಗ ನೇಕಾರಿಕೆಯಲ್ಲಿ ಕರುನಾಡ ಸಂಸ್ಕೃತಿ, ಕಲೆ ಬಿಂಬಿಸುವ ಯಾವ ರೀತಿಯ ವಿನ್ಯಾಸಗಳನ್ನು ಅಳವಡಿಸಿ ಕೊಳ್ಳಲಾಗಿದೆ; ಈ ಪ್ರಯೋಗಕ್ಕೆ ಬಂದಿರುವ ಗ್ರಾಹಕರ ಪ್ರತಿಕ್ರಿಯೆ ಹೇಗಿದೆ; | ಕೈಮಗ್ಗ ನೇಕಾರಿಕೆಯಲ್ಲಿ ಕರುನಾಡ ಸಂಸ್ಕೃತಿ, ಕಲೆಯನ್ನು ಬಿಂಬಿಸುವ ನಿಟ್ಟಿನಲ್ಲಿ ವಿವಿಧ ಬಣ್ಣದ ನೂಲಿನಿಂದ ಕೈಮಗ್ಗ ನೇಯ್ಗೆಯಲ್ಲಿ ಟಪೆಟ್ (Tappet) ಮಗ್ಗಗಳು, ಡಾಬಿ, ಮ್ಯಾನ್ಯುವಲ್ ಜಕಾರ್ಡ್ ಹಾಗೂ ಎಲೆಕ್ಟ್ರಾನಿಕ್ ಜಕಾರ್ಡ್ ಮೂಲಕ ವಿವಿಧ ಕಲಾತ್ಮಕ ವಿನ್ಯಾಸಗಳನ್ನು ಅಳವಡಿಸಲಾಗಿದ್ದು. ಈ ವಿನ್ಯಾಸಗಳಿಗೆ ಗ್ರಾಹಕರಿಂದ ಉತ್ತಮ ಪ್ರತಿಕ್ರಿಯೆ ದೊರೆತಿದೆ. |
| ಈ | ಯುವ ಜನತೆಯಲ್ಲಿ ದೇಶೀಯ ಅಭಿರುಚಿ ಬಿಂಬಿಸುವ ಪ್ರಾದೇಶಿಕ ವಿಶೇಷತೆಗಳ ಯಾವ ರೀತಿಯ ವಸ್ತ್ರ ವಿನ್ಯಾಸ ಹೆಚ್ಚು ಬೇಡಿಕೆಯಲ್ಲಿದೆ? (ಉಡುಗೆಗಳಂತಹ, ಬ್ಯಾಗಿನಂತಹ, ಹೊದಿಕೆಯಂತಹ, ಹಾಸಿನಂತಹ ವಸ್ತ್ರಗಳ ಬಗ್ಗೆ ವಿವರ ನೀಡುವುದು) | ಭೌಗೋಳಿಕ ಸೂಚಿಕೆ (ಜಿ.ಐ ಟ್ಯಾಗ್) ಹೊಂದಿರುವ ಮೊಳಕಾಲ್ಮೂರು ರೇಷ್ಮೆ ಸೀರೆ / ಇಳಕಲ್ ಸೀರೆ / ಉಡುಪಿ ಸೀರೆ ಮತ್ತು ಗುಳೇದಗುಡ್ಡ ಖಣಗಳ ವಸ್ತ್ರಗಳಿಗೆ ಬೇಡಿಕೆ ಇದೆ. ಇದರ ಜೊತೆಯಲ್ಲಿ ಕೈಮಗ್ಗದ ವಿವಿಧ ನಮೂನೆಯ ನೈಸರ್ಗಿಕ ನೂಲುಗಳಂದ ಅಂದರೆ, ಬಾಳೆ ನಾರು, ಹತ್ತಿ ನೂಲು ಇತ್ಯಾದಿ) ನೇಯ್ದ ಬಟ್ಟೆಗಳನ್ನು ಉಪಯೋಗಿಸಿ ತಯಾರಿಸಿದ ಉತ್ಪನ್ನಗಳಾದ **ಉಡುಗೆ, ಬ್ಯಾಗ್, ಹೋಂ ಫರ್ನಿಶಿಂಗ್ಸ್, ಬೆಡಶೀಟ್, ಟವಲ್, ಚಾದರ, ಉಣ್ಣೆ, ಕಂಬಳಿ, ಜಮಖಾನ** ಇತ್ಯಾದಿಗಳಿಗೆ ಯುವ ಜನತೆಯಿಂದ ಬೇಡಿಕೆ ಇರುತ್ತದೆ. |

**ಸಂ: CI 249 JAKE 2021**

(ಶಂಕರ ಬ ಪಾಟೀಲ ಮುನೇನಕೊಪ್ಪ)
ಕೈಮಗ್ಗ ಮತ್ತು ಜವಳಿ, ಸಕ್ಕರೆ ಹಾಗೂ ಕಬ್ಬು ಅಭಿವೃದ್ಧಿ ಸಚಿವರು